

ಕಡೆದೊಡೆ ಪಾಲ್ಗಡಲ್ ವಿವಿಧವಸ್ತುವನೀಯದೆ ತೇಯೆ
ಚಂದನಂ|
ಕುಡದೆ ಸುಗಂಧಮಂ ಪಿಳಿಯೆ ಕರ್ಬಿನಿದಾಗದೆ ಕಾಸೆ
ಕಾಂಚನಂ|| ಪಡೆಯದೆ ಕಾಂತಿಯಂ
ನಿಜದಿನೊಳ್ಳಿದರಪ್ಪವರೆಂತು ಬಾಧೆವ|
ಟ್ಟೊಡಮುಪಕಾರಮಂ ಪೆರರ್ಗೆ ಮಾಡದೆ
ಬಾಧೆಯನೇಕೆ ಮಾಡುವರ್|| --ನಾಗಚಂದ್ರ



ಬಾಗಿದೆಳೆಲತೆಯೊಳೊಂದೊಂದು ಮಿಡಿಗಾಯ್ದಿಡಿದ|
ಪೂಗೊಂಚಲಂ ಜಿನುಗುವಳಿವೆರಸಿ ತಂಗಾಳಿ |
ತೂಗುವಂತಬಲನಂ ತೊಟ್ಟಿಲೊಳ್ ಪಟ್ಟಿರಿಸಿ
ವನಿತೆಯರು ತೂಗಿ ಬಳಿಕ|| ಜೋಗುಳಂ
ಪಾಡಿಯಾಡಿಸುವ ನೊರೆವಾಲೆರೆವ|
ಸಾಗಿಸುವ ಸಂತೈಸುವೆತ್ತಿಕೊಂಬೆಲ್ಲಾ ನಿ|
ಯೋಗಕಾಂತೆಯರ ಕೈಯೊಳು ಬೆಳೆದನೊಲಿದು
ಶಿಶುವಾದಯ್ಯನಾದಯ್ಯನು||
--------ರಾಘವಾಂಕ(ಸೋಮನಾಥ ಚರಿತೆ)

ಭಾಷೆ ಗಾಡಿಯಿದ್ದ ಹಾಗೆ ; ಗೊಬ್ಬರದ ಗಾಡಿಯಲ್ಲಿ
ಚಿನ್ನದ ಗಟ್ಟಿಗಳನ್ನು ಹೇರಿಕೊಂಡು ಬಂದರೆ ಅವಕ್ಕೆ ಬೆಲೆ
ಕಡಿಮೆಯಾಗುತ್ತದೆಯೇ ? ಚಿನ್ನದ ಗಾಡಿ ಯಲ್ಲಿ
ಗೊಬ್ಬರವನ್ನು ಹೇರಿಕೊಂಡು ಬಂದರೆ ಅದಕ್ಕೆ ಬೆಲೆ
ಬರುತ್ತದೆಯೇ ? 'ಗಂಭೀರ' ಭಾಷೆ, 'ಗಂಡು'
ಭಾಷೆಯೆಂದು ಅನ್ಯಭಾಷೆಗಳಿಗೆ
ಸೋತುಬಿಡೋಣವೇ?

----ಬಿಎಂಶ್ರೀ



ಬಾಗಿದೆಳೆಲತೆಯೊಳೊಂದೊಂದು ಮಿಡಿಗಾಯ್ವಿಡಿದ|
ಪೂಗೊಂಚಲಂ ಜಿನುಗುವಳಿವೆರಸಿ ತಂಗಾಳಿ|
ತೂಗುವಂತಬಲನಂ ತೊಟ್ಟಿಲೊಳ್ ಪಟ್ಟಿರಿಸಿ
ವನಿತೆಯರು ತೂಗಿ ಬಳಿಕ||
ಜೋಗುಳಂ ಪಾಡಿಯಾಡಿಸುವ ನೊರೆವಾಲೆರೆವ|
ಸಾಗಿಸುವ ಸಂತೈಸುವೆತ್ತಿಕೊಂಬೆಲ್ಲಾ ನಿ|
ಯೋಗಕಾಂತೆಯರ ಕೈಯೊಳು ಬೆಳೆದನೊಲಿದು
ಶಿಶುವಾದಯ್ಯನಾದಯ್ಯನು||
-------ರಾಘವಾಂಕ(ಸೋಮನಾಥ ಚರಿತೆ)



ಹುಲುಬಯಕೆ ಬಾ ಎನಲು, ಓ ಎಂದು ಬಾರದಿರು
ವಾತಾಪಿಯಂದದೊಳು ಬಾಳನೊಡೆದು.
ಮೊಗ್ಗಿನೊಳು ಕಂಪಂತೆ ಚೇತದೊಳು ಬಳೆಯುತ್ತ

ಸಮಯವರಿತರಳಿ ಬಾ, ಒಲವೆ ನಲಿದು-
ಇಂತೆಮ್ಮ ಬಿನ್ನಹವ ಮಾರ ಮನ್ನಿಸಲಿ,
ಆಮೋದಕಾಗುವೊಲು ಬಾಳನಾಗಿಸಲಿ !
---ಪುತಿನ(ಅಹಲ್ಯೆ)



ಎಸಳ್ಗಳನೆಯ್ದೆ ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣ
ಚೂರ್ಣಮಂ|
ಪಸರಿಸಿ ಕೇಸರಾಕೃತಿಯೊಳಲ್ಲಿಗೆ ಕರ್ಣಿಕೆಯಂದಮಾಗೆ
ಕೀ|
ಲಿಸಿ ಪೊಸತಪ್ಪ ಮಾಣಿಕದ ನುಣ್ಬರಲಂ ಮಧು
ಮನ್ಮಥಂಗೆ ಬ|
ಣ್ಣಿಸಿ ಸಮೆದಂತೆ ತೋರುವುದು ಪೂಗಳೊಳೇಂ
ಸುರಹೊನ್ನೆ ಚೆನ್ನಮೋ||



ಮುರುಹಿ ನಿಂದವು ಕೊಡಹಿದವು ಕೇ
ಸರವನಧ್ವಶ್ರಮದ ಢಗೆ ಪರಿ
ಹರಿಸಿರಿಸೆ ನೀರೊಳು ಹೊಗಿಸಿದನು ಹರಿ ಹಯ
ಚತುಷ್ಟಯವ|
ಸರಸಿಯಲಿ ಮೊಗವಿಟ್ಟು ಮೊಗೆದವು
ವರಜಲವನೆರಡಳ್ಳೆ ಹಿಗ್ಗಲು
ಮುರುಹಿದವು ಮುಖವನು ಮುರಾಂತಕ
ತಡಿಯನಡರಿಸಿದ||

ಕರತಳದಿ ಮೈದಡವಿ ಗಾಯದ
ಸರಳ ಕಿತ್ತೌಷಧಿಯ ಲೇಪವ
ನೊರಸಿದನು ಕರಣದಲಿ ಚಪ್ಪರಿಸಿದನು ಕಂಧರವ|
ಹರುಷ ಮಿಗೆ ಕೊರಳೆತ್ತಿ ನಯನವ
ತಿರುಪಿ ದೇವನ ನೋಡುತುರ್ದುವು
ತುರಗ ನಾಲ್ಕರ ಪುಣ್ಯ ಸನಕಾದಿಗಳಿಗಿಲ್ಲೆಂದ||



ಕೊಳನ ತಡಿಯಲಿ ಹೂಡಿದನು ಶರ
ವಳಯದಲಿ ಚಪ್ಪರವನಾತನ
ಬಲುಹ ಕಂಡಸುರಾರಿ ಮೆಚ್ಚಿದನಡಿಗಡಿಗೆ ಹೊಗಳಿ||
ಕಳಚಿ ನೊಗವನು ತೆಗೆದು ಕಬ್ಬಿಯ
ನಿಳುಹಿ ಪಡಿವಾಘೆಗಳ ಸರಿದನು
ಕೊಳಿಸಿ ಪಿಡಿಯಲು ಪಾಡಿಗೈದವು ಮರಳಿದೆಡಬಲಕೆ||


ಪಾರಿಜಾತ ಹುಟ್ಟಿಸಿದನ
ಎದೆಯ ಹದವು,ಮನದ ಹದನ
ಏನು ಮಾಟ,ಎಂಥ ಆಟ,ಇದರ ಕೂಟ
ತಿಳಿಯದು!
---ದ.ರಾ.ಬೇಂದ್ರೆ
REDMI NOTE 6 PRO
MI DUAL CAMERA




---ಮುಪ್ಪಿನ ಷಡಕ್ಷರಿ

ಚಿತ್ರ-ವಡ್ಡಾದಿ ಪಾಪಯ್ಯ



ಎನ್ನ ಪಾಡೆನಗಿರಲಿ , ಅದರ ಹಾಡನ್ನಷ್ಟೆ
ನೀಡುವೆನು ರಸಿಕ ನಿನಗೆ.
ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ
---ದ.ರಾ.ಬೇಂದ್ರೆ



ಜ್ಞಾನದೊಳು ಮೌನವನು,ಶಕ್ತಿಯೊಳು
ಸಹನೆಯನು,ತ್ಯಾಗದೊಳು ನಿಃಸ್ತುತಿಯನು|
ಕೂಡಿಸಿರಲವಿರೋಧದಿಂದಿರುವ ಗುಣಗಳಿವು,
ಒಡಹುಟ್ಟುಗಳ ತೆರದೊಲಿದವು||
--ಕನ್ನಡ ರಘುವಂಶ,ಎಸ್.ವಿ.ಪಿ



ಸತ್ಯ ಜ್ಞಾನ ಮೌನ ತಪವು
ನಿತ್ಯ ಕ್ಷಮೆಯು ದಮೆಯು ಶಾಂತಿ
ಉತ್ತಮತ್ವವಿರಲು ಪಕ್ವವೆಂದು ತಿಳಿವುದು|
ಒತ್ತಿ ನೋಡಲವರ ಮನವ
ಮತ್ತೆ ಬೈಯ್ದು ಹೊಯ್ದು ನೋಡೆ
ಚಿತ್ತದಲ್ಲಿ ಸ್ವಸ್ಥವಾಗಿ ಕಲಕದಿರ್ಪುದು||
---ಮುಪ್ಪಿನ ಷಡಕ್ಷರಿ


ಹರನ ವಾಕ್ಯಸ್ಫುರಣೆಗವದಿರು|
ಶಿರದೊಳಾಂತರು ನೇಮವೆಮಗಿದು|
ಸರಿಯೆನುತ ಶಂಕರಗೆ ನಮಿಸುತ ಕ್ರೋಢರೂಪದಲಿ||
ಹರಿಯು ಪಾತಾಳವನು ಹೊಕ್ಕನು|
ಸರಸಿಜೋದ್ಭವ ಹಂಸರೂಪದಿ|
ಶಿರವ ನೋಡುವ ಭರದಿ ಹಾಯ್ದನು
ಊರ್ಧ್ವಭಾಗವನು||
--ಸಹ್ಯಾದ್ರಿಖಂಡ,ಸಂಧಿ೨೭




ಹೆಸರಿಲ್ಲದಲರುಗಳು
ಬೀಳ್ಬಯಲಿನಲ್ಲಿ;
ನಸುನಗುತ ನಲಿಯುವವು
ಬೇಳ್ಪರಿರದಲ್ಲಿ;
ಗರ್ವಗೌರವವಿನಿಸುಮರಿಯದಿವುಗಳನು
ಗುರಿಮರತು ನಿರವಿಸಿದನೊ ವಿರಿಂಚನನು!--ಡಿವಿಜಿ



ಬಿರಿದಳಿವ ಹೂವೇಕೆ?
ಕಿರಬಾಳದೇಕೆ?
ಮರೆವಿಗಾಹುತಿಯಪ್ಪ
ಕಿರುಗವಿತೆಯೇಕೆ?
ಎಡೆಯುಂಟು ಸೃಷ್ಟಿಯುದ್ಯಾನದೊಳಗೆ
ಬಡಹೂವು,ಬಡಹಾಡು,ಬಡಬಾಳುಗಳಿಗೆ
---ಡಿವಿಜಿ

ನಿಶೆಯ ಕೌಮುದಿ; ಬಾನಬಯಲಗಡಲಿನ ನೌಕೆ
ಆರು ಕಾಲಕು ತೇಲಿ; ಮಲೆಯ ಜಡೆಯಲಿ ಮೂಡಿ
ಸೂಸಿ ಸೌಸವ; ಇರವೆ? ಮಾತು ಬೇಕೇ ಏಕೆ?........





........
ಮಾತು ಮೌನದ ಪ್ರತಿಮೆ; ಮೌನ ಮಾತಿನ ದೈವ.
-----ದ.ರಾ.ಬೇಂದ್ರೆ




ಹಾಡ ನುಡಿಸ್ಯಾಕ
ಹೆಚ್ಚಿಗೇನು ಬೇಕ?
ಒಂದು ಹೂತ ಹುಣಸಿ ಮರ ಸಾಕ
---ಹೂತಽದ ಹುಣಸಿ-ದ.ರಾ.ಬೇಂದ್ರೆ



ವನಮಂ ಸುಡುವಗ್ನಿಗೆ ವಾ|
ಯುನೆಂಟನದೆ ದೀಪನಾಶಮಂ ಮಾಡುವವೊ||
ಲ್ಪನ ತೇಜಂ ಕಿಡೆ ಕಮಠಂ|
ಗನುಕೂಲ ಜನಾಳಿಯಾಯ್ತು ತಾಂ ಪ್ರತಿಕೂಲಂ||
--ಪಾರ್ಶನಾಥ ಚಂಪೂ,ಜಿಪಿ ರಾಜರತ್ನಂ



ಇರಲು ನಿಮಿಷದೊಳಸುರರಿಪು ಮೈ|
ಮುರಿದುವುಪ್ಪವಡಿಸಿದನಿದಿರೊಳು|
ಸುರಪತಿಯ ಸೂನುವನು ಕಂಡನು ನಗೆಯ ಮೊಳೆ
ಮಿನುಗೆ||
ತಿರುಗಿ ನೋಡುತೆ ತಲೆಯ ದೆಸೆಯೊಳು|
ಕುರುಕುಲೇಶ್ವರನತಿವಿಕಾರಿತೆ|
ಯಿರವ ಕಂಡನಿದೇನಿದೇನೆಂದಸುರರಿಪು ನುಡಿದ||
ಚಿತ್ರ--ಎಂಟಿವಿ ಆಚಾರ್ಯ, ಚಂದಮಾಮ




ಭರದ ಭಾರಣೆಯಲಿ ಚತುರ್ದಶಿ|
ಯಿರುಳು ಮಗಧನ ಬಾಹುಸತ್ವದ|
ಮುರಿವು ಮೊಳೆತುದು ಶೌರ್ಯ ಸೆಡೆದುದು ಭಯದ
ಬಿಗುಹಿನಲಿ||
ಉರುಪರಾಕ್ರಮತೇಜ ಪಡುವಣ|
ತರಣಿಯಾದುದು ಧಟ್ಟಣೆಯ ಧರ|
ಧುರಕೆ ನಿದ್ರ್ರವಜಿಹ್ವೆಯಾದುದು ನಿಮಿಷನಿಮಿಷದಲಿ||
ಚಿತ್ರ--ಎಂಟಿವಿ ಆಚಾರ್ಯ, ಚಂದಮಾಮ



ಶಿವನೊಳಪೊಕ್ಕು ಮಿಕ್ಕಲರ್ದು ಸೊರ್ಕಿ
ಸೊಗಂಪಡೆದುರ್ವಿ ಪರ್ವಿ ಬಾ|
ಹ್ಯವಿಷಯವೃತ್ತಿಯಂ ಮರೆದು ಜುಮ್ಮನೆ ಕೂರ್ತು
ಬೆಮರ್ತು ನೇತ್ರ ಸಂ|
ಭವಭಾಷ್ಪದಿಂ ನನೆದು ಪೊಂಪುಳಿವೋಗಿ ಪೊದಳ್ದ
ಭಕ್ತಿಯು|
ತ್ಸವರಸದೊಳ್ಮುಳುಂಗಿ ಸುಖಮಿರ್ದನೊರಲ್ದು
ವೃಷಾಧಿನಾಯಕಂ
---ಷಡಕ್ಷರಿ



ಸ್ವಸುಖದೊಳಾಸೆಯನುಳಿದೀ|
ವಸುಧೆಯ ಪೊರೆಯಲ್ಕೆ ನೀಂ ಬಳಲ್ವುದೆ ಸಾಜಂ||
ಬಿಸಿಲಿನ ಬೇಗೆಗೆ ತಲೆಯಾ|
ನಿಸಿ ತರುವುಂ ಶ್ರಿತರ ತಂಪಿಸುವುದಲ್ತೆ ನೆಳಲಿಂ||

ಕರ್ಣಾಟಕ ಶಾಕುಂತಲ

ಚಿತ್ರ-ಶಂಕರ್,ಚಂದಮಾಮ



ವಿಮಲವಿದ್ಯೆ ದೇಹಕೊಡವೆ ಶಾಂತಿಯದಕೆ ಭೂಷಣ|
ಕೋಪಶಮನ ಕಾರಣ||
ಶಾಂತಿಗೊಡವೆ ಶೌರ್ಯವೆನಲು ನೀತಿಲಬ್ಧ ಸಿದ್ಧಿಯು|
ಶೌರ್ಯಕಪ್ಪುದೊಡವೆಯು||
--ಕನ್ನಡ ಕಿರಾತಾರ್ಜುನೀಯ
ಡಾ|ಕೆ.ಕೃಷ್ಣಮೂರ್ತಿ



ಮುತ್ತಿನ ಬೆಜ್ಜಮಂ ನೆಗಳಬಲ್ಲವನಿಂ
ಬೃಹದಶ್ಮರಂಧ್ರಮೊ|
ಪ್ಪೊಪ್ತಿಗೆ ತೂಗದಿರ್ಪುವುದದೂಣೆಯೆ ನಿಮ್ಮಯ
ಕೀರ್ತನಾನ್ನಮಂ|
ತುತ್ತನೊಡರ್ಚುವಂ
ನಿಗಮಶಾಸ್ತ್ರಘನೋದನರಾಶಿಯಂ ಬಿಡ|
ಲ್ಕೆತ್ತಣ ದೋಷವಾಪ್ತಭರಣಾ....
--ಸಂಗವಿಭು

ಚಿತ್ರ-ವಡ್ಡಾದಿಪಾಪಯ್ಯ,ಚಂದಮಾಮ



ಜನನೀ ತಮೋವಿಮೋಚನ ವಿಲೋಚನ ರೋಚಿಗಳಿಂ
ಮಹೇಶನಾ|
ನನ ಸರಸೀರುಹಾಬ್ಜ,ಶತಪತ್ರ,ಕುಶೇಶಯ,ಪದ್ಮ
ಮೋದ ಸಂ|
ಜನಿಸೆ ಪರಾಗಕೇಸರಿಗಳಂತೆ
ವಿಭೂತಿಜಟಾರುಣತ್ವಗಳ್|
ಮನಸಿಗೆ ಮಂಗಳ ಬೆರೆಯೆ ಮೆಚ್ಚಿಸಿದೌ
ಭುವನ್ನೈಕದಾಯಕೀ||
--ಸಂಗವಿಭು



--ಸಂಗವಿಭು

ಚಿತ್ರ-ಶಂಕರ್,ಚಂದಮಾಮ